## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 742 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 10.03.2020 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪಡಿತರ ವ್ಯವಸ್ಥೆಗೆ ಪಾರದರ್ಶಕತೆ ತರಲು ಹಾಗೂ ಸೋರಿಕೆ ತಡೆಗಟ್ಟಲು ಪಡಿತರ ಚೀಟಿಗೆ ಆಧಾರ್ ಸಂಖ್ಯೆ ಜೋಡಣೆ ಮಾಡುವ ಯೋಜನೆ ಜಾರಿಗೊಳಿಸಿದ್ದು, ಸದರಿ ಪ್ರಕ್ರಿಯ ಪೂರ್ಣಗೊಂಡಿದೆಯೇ; | ರಾಜ್ಯದಲ್ಲಿನ 1,27,06,726 ಆದ್ಯತಾ (ಪಿ.ಹೆಚ್.ಹೆಚ್) ಪಡಿತರ ಚೀಟಿಗಳ ಪೈಕಿ 1,27,06,479 ಪಡಿತರ ಚೀಟಿಗಳನ್ನು ಆಧಾರ್ ನೊಂದಿಗೆ ಜೋಡಣೆ ಮಾಡಲಾಗಿದ್ದು, ಶೇ.99.99 ರಷ್ಟು ಜೋಡಣೆ ಕಾರ್ಯವನ್ನು ಪೂರ್ಣಗೊಳಿಸಲಾಗಿದೆ. |
| ಆ | ಆಧಾರ್ ಜೋಡಣೆಯಿಂದ ಎಷ್ಟು ನಕಲಿ ಕಾರ್ಡುಗಳನ್ನು ಪತ್ತೆ ಹಚ್ಚಲಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು) | ಎಲ್ಲಾ ಫಲಾನುಭವಿಗಳ ಆಧಾರ್ ದೃಢೀಕರಣವನ್ನು ಸಂಗ್ರಹಿಸುವ ಇ-ಕೆವೈಸಿ ಕಾರ್ಯಕ್ರಮವು 2020ರ ಏಪ್ರಿಲ್ 30ರವರೆಗೆ ಜಾರಿಯಲ್ಲಿದ್ದು, ಸದರಿ ಕಾರ್ಯವು ಪೂರ್ಣಗೊಂಡ ನಂತರ ನೈಜ ಮಾಹಿತಿ ಲಭ್ಯವಾಗುವುದು. |
| ಇ | ನಕಲಿ ಕಾರ್ಡುಗಳನ್ನು ಹೊಂದಿದವರ ಮೇಲೆ ಯಾವ ರೀತಿ ಕಾನೂನು ಕ್ರಮ ಕೈಗೊಳ್ಳಲಾಗಿದೆ; | ರಾಜ್ಯದಲ್ಲಿ ಕಳೆದ ಎಂಟು ತಿಂಗಳಿನಿಂದ ಒಟ್ಟು 63,922 ಅನರ್ಹ ಪಡಿತರ ಚೀಟಿಗಳನ್ನು ಗುರುತಿಸಿ ಅವರಿಂದ ರೂ.96,27,960/- ದಂಡವನ್ನು ಸಂಗ್ರಹಿಸಿ ಪಡಿತರ ಚೀಟಿಗಳನ್ನು ರದ್ದುಪಡಿಸಲಾಗಿದೆ. ಅನರ್ಹರು ಪಡಿತರ ಚೀಟಿಗಳನ್ನು ಸ್ವ ಇಚ್ಛೆಯಿಂದ ಸಂಬಂಧಪಟ್ಟ ತಾಲ್ಲೂಕು/ವಲಯ ಕಛೇರಿಗಳಿಗೆ ಸಂಪರ್ಕಿಸಿ ಏಪ್ರಿಲ್-2020 ರೊಳಗೆ ಅಧ್ಯರ್ಪಣೆಯನ್ನು ಮಾಡುವಂತೆ ಕಾಲಾವಕಾಶವನ್ನು ನಿಗದಿಪಡಿಸಲಾಗಿದೆ. ಈ ಅವಧಿ ಮುಗಿದ ನಂತರವೂ ಇಂತಹ ಅನರ್ಹರು ಪಡಿತರ ಚೀಟಿಯನ್ನು ಅಧ್ಯರ್ಪಣೆ ಮಾಡದಿದ್ದಲ್ಲಿ |

| | | |
|---|---|---|
| | | ಇಲಾಖಾವತಿಯಿಂದ ಅನರ್ಹ ಪಡಿತರ ಚೀಟಿ ಹೊಂದಿರುವವರ ವಿರುದ್ಧ ದಂಡ ವಿಧಿಸಲಾಗುವುದು ಹಾಗೂ ಅವಶ್ಯಕ ವಸ್ತುಗಳ ಕಾಯ್ದೆ 1955 ರಡಿ ಹೊರಡಿಸಲಾದ The prevention of unauthorised possession of ration card order 1977 ರನ್ವಯ ಪ್ರಕರಣ ದಾಖಲಿಸಲಾಗುವುದು. |
| ಈ | ನಕಲಿ ಕಾರ್ಡು ಹೊಂದಿರುವವರ ಪಟ್ಟಿಯಲ್ಲಿ ಕರ್ನಾಟಕ ಯಾವ ಸ್ಥಾನದಲ್ಲಿದೆ? | ಅನ್ವಯಿಸುವುದಿಲ್ಲ |

ಆನಾಸ 70 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.